## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1778
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 23/03/2020
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಗೋವಾ ಸರ್ಕಾರವು ಧಾರವಾಡ ಸಮೀಪದ ನರೇಂದ್ರದಿಂದ ಗೋವಾಕ್ಕೆ ವಿದ್ಯುತ್ ಲೈನ್ ಎಳೆಯಲು ಬೆಳಗಾವಿ, ಧಾರವಾಡ, ಉತ್ತರ ಕನ್ನಡವೂ ಸೇರಿದಂತೆ ರಾಜ್ಯದ ಮೂರು ಜಿಲ್ಲೆಗಳ ಅರಣ್ಯ ಭೂಮಿಯ ಪರಿವರ್ತನೆಗಾಗಿ ಕೇಂದ್ರ ಅರಣ್ಯ ಸಚಿವಾಲಯಕ್ಕೆ ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಕರ್ನಾಟಕ ರಾಜ್ಯದ ಧಾರವಾಡ ಸಮೀಪದ ನರೇಂದ್ರದಿಂದ ಗೋವಾ ರಾಜ್ಯದ ಎಕ್ಸೆಂ ತನಕ 400 ಕಿಲೋ ವೋಲ್ಟ್ ವಿದ್ಯುತ್ ಲೈನ್ ಎಳೆಯಲು ಗೋವಾ-ತಮ್ನಾರ್ ಟ್ರಾನ್ಸ್ ಮಿಷನ್ ಪ್ರೈವೇಟ್ ಲಿಮಿಟೆಡ್, ನವದೆಹಲಿ ಎನ್ನುವ ಸಂಸ್ಥೆಯು ಕರ್ನಾಟಕ ರಾಜ್ಯದ ಧಾರವಾಡ, ಬೆಳಗಾಂ ಹಾಗೂ ಉತ್ತರ ಕನ್ನಡ ಜಿಲ್ಲೆಯ ಒಟ್ಟು 177.091 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಬಿಡುಗಡೆಗೊಳಿಸಲು ಅರಣ್ಯ ಸಂರಕ್ಷಣೆ ಕಾಯ್ದೆ 1980ರ ಅಡಿಯಲ್ಲಿ ಕೇಂದ್ರ ಸರ್ಕಾರದ ವೆಬ್ ಪೋರ್ಟಲ್ (www.parivesh.nic.in) ಮೂಲಕ ದಿನಾಂಕ 19.12.2018ರಂದು ಪ್ರಸ್ತಾವನೆ ಸಂಖ್ಯೆ: FP/KA/TRANS/37754/2018ನ್ನು ಸಲ್ಲಿಸಿರುತ್ತದೆ. |
| ಆ) | ಅನ್ಯ ರಾಜ್ಯದ ಪ್ರಯೋಜನಕ್ಕಾಗಿ ನಮ್ಮ ರಾಜ್ಯದ ಅರಣ್ಯ ಸಂಪತ್ತು ನಾಶ ಮಾಡುವುದಕ್ಕೆ ಈಗಾಗಲೇ ಪರಿಸರವಾದಿಗಳು ವಿರೋಧ ವ್ಯಕ್ತಪಡಿಸುತ್ತಿದ್ದು, ಇದರ ಕುರಿತು ಸರ್ಕಾರದ ನಿಲುವೇನು; | ಈ ಯೋಜನೆಗೆ ಈಗಾಗಲೇ ಪರಿಸರವಾದಿಗಳು ಪತ್ರ ಮುಖೇನ ವಿರೋಧ ವ್ಯಕ್ತಪಡಿಸಿದ್ದು, ಅವರ ಆಕ್ಷೇಪಣೆಗಳನ್ನು ಪರಿಶೀಲಿಸಿ ವಾಸ್ತವಾಂಶದ ವರದಿಯನ್ನು ಕೇಂದ್ರ ಸರ್ಕಾರದ ವೆಬ್ ಪೋರ್ಟಲ್ ಮೂಲಕ ಸಲ್ಲಿಸಲು ಘಟಕಾಧಿಕಾರಿಗಳಿಗೆ ತಿಳಿಸಲಾಗಿದ್ದು, ಪ್ರಸ್ತುತ ಪ್ರಸ್ತಾವನೆಯು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಳಗಾವಿ ವೃತ್ತ ಇವರ ಬಳಿ ಬಾಕಿ ಇರುತ್ತದೆ.<br>ಸದರಿಯವರಿಂದ ವರದಿಯು ಸ್ವೀಕೃತವಾದ ನಂತರ ರಾಜ್ಯದ ಅರಣ್ಯ ಹಾಗೂ ವನ್ಯಜೀವಿ ಸಂಪತ್ತುಗಳ ಮೇಲೆ ಈ ಯೋಜನೆಯ ಪರಿಣಾಮವನ್ನು ಕೂಲಂಕಷವಾಗಿ ಪರಿಶೀಲಿಸಿ ಸೂಕ್ತ ಶಿಫಾರಸ್ಸಿನೊಂದಿಗೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಲಾಗುವುದು. |
| ಇ) | ಉತ್ತರ ಕನ್ನಡದ ದಾಂಡೇಲಿ ಆನೆಧಾಮ, ದಾಂಡೇಲಿ ವನ್ಯಜೀವಿ ಸುರಕ್ಷಿತ ವಲಯ ಹಾಗೂ ಬೆಳಗಾವಿ ಜಿಲ್ಲೆಯ ಭೀಮಗಢದ ಪರಿಸರ ಸೂಕ್ಷ್ಮ ವಲಯದ ಮೂಲಕ ಪ್ರಸ್ತಾಪಿತ ವಿದ್ಯುತ್ ಲೈನ್ ಹಾದು ಹೋಗುತ್ತಿದ್ದು, ಇದರಿಂದ ಪರಿಸರಕ್ಕೆ ಧಕ್ಕೆಯುಂಟಾಗುತ್ತಿದ್ದು, ಇದನ್ನು ತಪ್ಪಿಸುವ ನಿಟ್ಟಿನಲ್ಲಿ ಸರ್ಕಾರ ಕ್ರಮ ಕೈಗೊಳ್ಳುವುದೇ; | ಈ ಯೋಜನೆಗೆ ಬೇಕಾಗಿರುವ ಜಮೀನು ಭಾಗಶಃ ವನ್ಯಜೀವಿ ಪ್ರದೇಶಕ್ಕೆ ಒಳಪಟ್ಟಿರುವುದರಿಂದ ಅರಣ್ಯ ಸಂರಕ್ಷಣಾ ಕಾಯ್ದೆ 1980ರಡಿ ಕೇಂದ್ರ ಸರ್ಕಾರದ ಅನುಮೋದನೆಯ/ನಿರ್ಣಯ ಮುನ್ನ ಈ ಪ್ರಸ್ತಾವನೆಗೆ ರಾಷ್ಟ್ರೀಯ ವನ್ಯಜೀವಿ ಮಂಡಳಿಯ ಅನುಮೋದನೆ ಪಡೆಯುವುದು ಸಹ ಅವಶ್ಯವಿರುತ್ತದೆ.<br>ರಾಷ್ಟ್ರೀಯ ವನ್ಯಜೀವಿ ಮಂಡಳಿಯ ನಿರ್ಣಯವಾದ ನಂತರ ಈ ಪ್ರಸ್ತಾವನೆಗೆ ಅರಣ್ಯ ಸಂರಕ್ಷಣಾ ಕಾಯ್ದೆ 1980ರಡಿ ಕೇಂದ್ರ ಸರ್ಕಾರದ ನಿರ್ಣಯದಂತೆ ಸೂಕ್ತ ಕ್ರಮಕೈಗೊಳ್ಳಲಾಗುವುದು. |
| ಈ) | ಅರಣ್ಯ ನಾಶದ ಭೀತಿ ಇರುವ ಸದರಿ ಮಾರ್ಗದ ಬದಲು ಗೋವಾ ಸರ್ಕಾರ ಬದಲಿ ಮಾರ್ಗದ ಪರ್ಯಾಯ ವ್ಯವಸ್ಥೆ ಮಾಡಿಕೊಳ್ಳುವಂತೆ ಮಾಡಲು ಗೋವಾ ಸರ್ಕಾರ ಹಾಗೂ ಕೇಂದ್ರದ ಮೇಲೆ ಒತ್ತಡ ಹಾಕುವ ಯೋಜನೆ ಸರ್ಕಾರಕ್ಕೆ ಇದೆಯೇ? | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಪಮು)ಯವರಿಂದ ವಾಸ್ತವಿಕ ಅಂಶಗಳ ವರದಿಯು ಸ್ವೀಕೃತವಾದ ನಂತರ ಸೂಕ್ತ ಶಿಫಾರಸ್ಸಿನೊಂದಿಗೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಲಾಗುವುದು |

ಸಂಖ್ಯೆ: ಅಪಜೀ 10 ಎಫ್‌ಎಫ್‌ಎಂ 2020

21/03/2020
(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು